**ಕರ್ನಾಟಕ ವಿಧಾನ ಪರಿಷತ್ತು**

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 208
2. ಮಾನ್ಯ ಸದಸ್ಯರ ಹೆಸರು : ಶ್ರೀ ಬಿ.ಕೆ.ಹರಿಪ್ರಸಾದ್
3. ಉತ್ತರಿಸಬೇಕಾದ ದಿನಾಂಕ : 14.12.2021
4. ಉತ್ತರಿಸುವ ಸಚಿವರು : ಸಹಕಾರ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೇಂದ್ರ ಸರ್ಕಾರವು ಕೃಷಿ ಕಾಯ್ದೆಯನ್ನು ಹಿಂಪಡೆಯುವ ಕುರಿತಂತೆ ಘೋಷಣೆ ಮಾಡಿದ್ದು, ಆದಾಗ್ಯೂ ಕರ್ನಾಟಕ ಸರ್ಕಾರವು ಎ.ಪಿ.ಎಂ.ಸಿ. ಕಾಯ್ದೆಯನ್ನು ತಡೆಹಿಡಿದು ಕಂದಾಯ ಕಾಯ್ದೆಯನ್ನು ಮುಂದುವರೆಸುವ ಬಗ್ಗೆ ಸರ್ಕಾರದ ಮುಂದೆ ಪ್ರಸ್ತಾವನೆ ಇದೆಯೇ; ಇದ್ದಲ್ಲಿ ಈ ಕುರಿತಂತೆ ಸಂಪೂರ್ಣ ಮಾಹಿತಿ ಒದಗಿಸುವುದು; | ಕೇಂದ್ರ ಸರ್ಕಾರವು ಇತ್ತೀಚಿಗೆ ಕೃಷಿಗೆ ಸಂಬಂಧಿಸಿದ 3 ಹೊಸ ಕಾಯ್ದೆಗಳನ್ನು ಹಿಂದಕ್ಕೆ ಪಡೆದಿರುವುದು ಸರ್ಕಾರದ ಗಮನದಲ್ಲಿರುತ್ತದೆ.<br><br>ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966 ರಾಜ್ಯದ ಸ್ವತಂತ್ರ ಕಾಯ್ದೆಯಾಗಿದ್ದು, ಅದರ ಅಡಿ ನೀತಿ ನಿಯಮಗಳನ್ನು ಮಾಡುವ ಪೂರ್ಣ ಅಧಿಕಾರ ರಾಜ್ಯಕ್ಕೆ ಇರುತ್ತದೆ. ಈ ಹಿನ್ನೆಲೆಯಲ್ಲಿ ಈ ಹಿಂದೆ ಸದರಿ ಅಧಿನಿಯಮದ ಕಲಂ 8(2), ಕಲಂ 8(3) ಮತ್ತು ಕಲಂ 117ಕ್ಕೆ ದಿನಾಂಕ:31.12.2020 ರಂದು ತರಲಾಗಿರುವ ತಿದ್ದುಪಡಿಯನ್ನು ರಾಜ್ಯದ ಹಿತಾಸಕ್ತಿಗಳಿಗೆ ಅನುಗುಣವಾಗಿ ಪರಿಶೀಲಿಸಲಾಗುವುದು. ಸದರಿ ತಿದ್ದುಪಡಿಯ ಅನುಕೂಲ ಹಾಗೂ ಅನಾನೂಕೂಲಗಳನ್ನು ಪರಿಶೀಲಿಸಿ ಸೂಕ್ತ ನಿರ್ಧಾರ ಕೈಗೊಳ್ಳಲಾಗುವುದು. |
| ಆ | ಈಗಾಗಲೇ ಹೊಸ ಕಾಯ್ದೆಯಡಿ, ಕೃಷಿ ಭೂಮಿಯನ್ನು ಖರೀದಿಸುವ ಫಲಾನುಭವಿಗಳಿಗೆ ಸದರಿ ಕೃಷಿ ಕಾಯ್ದೆ ಹಿಂಪಡೆಯುವುದರಿಂದ ಆಗುವ ಸಾಧಕ ಬಾಧಕಗಳ ಕುರಿತಂತೆ ಕಾನೂನು ವ್ಯಾಪ್ತಿಯ ವಿವರಣೆಯೇನು? (ಸಂಪೂರ್ಣ ಮಾಹಿತಿ ಒದಗಿಸುವುದು) | ರಾಜ್ಯ ಸರ್ಕಾರವು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966 ಕಾಯ್ದೆ ಸಂ:59/2020ರ ಮೂಲಕ ಕಲಂ 8(2) ಹಾಗೂ ಕಲಂ 117ಕ್ಕೆ ತಿದ್ದುಪಡಿ ಮಾಡಿ ಅಧಿಸೂಚಿತ ಕೃಷಿ ಉತ್ಪನ್ನಗಳನ್ನು ಎಪಿಎಂಸಿ ಪ್ರಾಂಗಣದಲ್ಲಿಯೇ ಮಾರಾಟ ಮಾಡಬೇಕೆಂಬ ನಿರ್ಬಂಧ ತೆರವುಗೊಳಿಸಲಾಗಿದೆ ಹಾಗೂ ಎಪಿಎಂಸಿ ಸಮಿತಿಗಳ ನಿಯಂತ್ರಣವನ್ನು ಪ್ರಾಂಗಣಕ್ಕೆ ಸೀಮಿತಗೊಳಿಸಿದೆ. ಕಲಂ 8(2)ರ ಉಲ್ಲಂಘನೆಗೆ ದಂಡ ಮತ್ತು ಸಜೆ ಶಿಕ್ಷೆಯನ್ನು ವಿಧಿಸುತ್ತಿದ್ದ ಕಲಂ 117ನ್ನು ಕೈಬಿಡಲಾಗಿದೆ.<br><br>ಮಾರುಕಟ್ಟೆ ಕಾಯ್ದೆಗೆ ಹಾಗೂ ಭೂಸುಧಾರಣಾ ಕಾಯ್ದೆಗೆ ತಿದ್ದುಪಡಿ ಮಾಡಿರುವ ಮೇರೆಗೆ ಕೃಷಿ ಭೂಮಿಯನ್ನು ಕೃಷಿಕರಲ್ಲದೇ ಕೃಷಿಯೇತರರು ಸಹ ಹೊಂದಲು ಅವಕಾಶವಾಗಿದ್ದು, ಖಾಸಗಿಯವರು ಬಂಡವಾಳ ಹೂಡಿ ಕೃಷಿ ಭೂಮಿಯನ್ನು ಖರೀದಿಸಿ ಕೃಷಿ ಉತ್ಪನ್ನಗಳನ್ನು ಬೆಳೆದು ಮಾರಾಟ ಮಾಡಲು ಮುಕ್ತ ಅವಕಾಶ ಇರುತ್ತದೆ.<br><br>ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 54 ಶಾಸನ 2020, ದಿನಾಂಕ:30.12.2020ರಲ್ಲಿ ಕರ್ನಾಟಕ ಭೂ ಸುಧಾರಣಾ ಕಾಯ್ದೆ, 1961ರ ಕಲಂ 79ಎ ಮತ್ತು 79ಬಿ ಅನ್ನು ದಿನಾಂಕ:01.03.1974 ರಿಂದ ಅನ್ವಯವಾಗುವಂತೆ ತೆಗೆದುಹಾಕಲಾಗಿದೆ. ಈ ತಿದ್ದುಪಡಿಯಿಂದ ಈಗಾಗಲೇ ಇತ್ಯರ್ಥವಾದ ಪ್ರಕರಣಗಳಿಗೆ ಯಾವುದೇ ಭಾದಕವಾಗದೆ ಹಾಗೆ ಉಳಿಯತಕ್ಕದ್ದು, ಮುಂದುವರೆದು, ಯಾವುದೇ ನ್ಯಾಯಾಲಯ, ನ್ಯಾಯಾಧೀಕರಣ ಅಥವಾ ಸಕ್ಷಮಗೊಂಡ ಇತರ ಪ್ರಾಧಿಕಾರದ ಮುಂದೆ ಬಾಕಿಯಿರುವ ಎಲ್ಲಾ ಪ್ರಕರಣಗಳು ಈ ಮೂಲಕ ಕೊನೆಗೊಳ್ಳತಕ್ಕದ್ದು ಎಂದು ತಿದ್ದುಪಡಿ ಮಾಡಲಾಗಿದೆ. |

ಸಂಖ್ಯೆ: ಸಿಒ 306 ಎಂಆರ್‌ಇ 2021

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು